# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆ ಕ್ಷೇತ್ರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 438 (513)

ಉತ್ತರಿಸುವ ದಿನಾಂಕ : 11.12.2020

ಉತ್ತರಿಸುವವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಘನತ್ಯಾಜ್ಯ ನಿರ್ವಹಣೆಯು ಒಂದು ದೊಡ್ಡ ಸಮಸ್ಯೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತ್ಯಾಜ್ಯ ವಿಲೇವಾರಿ ವಿಷಯದಲ್ಲಿ ನಗರ ಪ್ರದೇಶದಲ್ಲಿ ಉಂಟಾಗುತ್ತಿರುವ ಅನೇಕ ಸಮಸ್ಯೆಗಳನ್ನು ಗಮನದಲ್ಲಿರಿಸಿಕೊಂಡು ಗ್ರಾಮೀಣ ಪ್ರದೇಶದಲ್ಲಿ ಇಂತಹ ಸಮಸ್ಯೆಗಳು ಉಂಟಾಗದಂತೆ ಮುಂಜಾಗ್ರತೆವಹಿಸುವ ಮೂಲಕ, ವಿವಿಧ ಮಾದರಿಯ ತಂತ್ರಜ್ಞಾನವನ್ನು ಅಳವಡಿಸಿ ಗ್ರಾಮ ಪಂಚಾಯಿತಿಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಒತ್ತು ನೀಡಿ ಅನುಷ್ಠಾನ ಮಾಡಲಾಗುತ್ತಿದೆ. |
| (ಆ) | ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಗ್ರಾಮಗಳ ಘನತ್ಯಾಜ್ಯ ನಿರ್ವಹಣೆಗಾಗಿ ಬಿಡುಗಡೆಯಾದ ಹಣವೆಷ್ಟು; | ಸ್ವಚ್ಛ ಭಾರತ್ ಮಿಷನ್ (ಗ್ರಾ) ಯೋಜನೆಯ ಎಲ್ಲಾ ಘಟಕಾಂಶಗಳ ಅನುಷ್ಠಾನಕ್ಕೆ ಕೇಂದ್ರ ಸರ್ಕಾರವು ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದ್ದು, ಪ್ರತ್ಯೇಕವಾಗಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿಲ್ಲ.<br>ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ 2014-15 ಸಾಲಿನಿಂದ ಇಲ್ಲಿಯವರೆಗೆ ಕೇಂದ್ರದ ಪಾಲು ರೂ. 3252.14ಕೋಟಿಗಳು, ರಾಜ್ಯದ ಪಾಲು ರೂ.2206.55 ಕೋಟಿಗಳು, ಒಟ್ಟಾರೆ ರೂ.5458.69 ಕೋಟಿಗಳು ಬಿಡುಗಡೆಯಾಗಿರುತ್ತದೆ.<br>ಈ ಅನುದಾನದಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಗಾಗಿ 2694 ಗ್ರಾ.ಪಂ.ಗಳ ವಿಸ್ತೃತ ಯೋಜನಾ ವರದಿಗಳಿಗೆ ರೂ.30923.66 ಲಕ್ಷಗಳಿಗೆ ಅನುಮೋದನೆ ನೀಡಿ, ರೂ.18902.05 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.<br>ಪ್ರಸ್ತುತ 607 ಗ್ರಾಮ ಪಂಚಾಯಿತಿಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣಾ ಘಟಕಗಳು ಕಾರ್ಯಾಚರಣೆಯಲ್ಲಿದ್ದು, ಇತರೆ 2087 ಗ್ರಾ.ಪಂ.ಗಳಲ್ಲಿ ಘಟಕಗಳ ಕಾಮಗಾರಿಗಳು ಪ್ರಗತಿ ಹಂತದಲ್ಲಿದ್ದು, ಶೀಘ್ರದಲ್ಲಿ ಪೂರ್ಣಗೊಳಸಲು ಕ್ರಮವಹಿಸಲಾಗುತ್ತಿದೆ. |
| (ಇ) | ಕಳೆದ ವರ್ಷ ರಾಜ್ಯದ ಎಷ್ಟು ಗ್ರಾಮಗಳಲ್ಲಿ ಈ ಘನತ್ಯಾಜ್ಯ ಸಂಸ್ಕರಣಾ ಘಟಕ/ನಿರ್ವಹಣೆಯ ವ್ಯವಸ್ಥೆ ಮಾಡಲಾಗಿದೆ; | 2019-20ನೇ ಸಾಲಿನಲ್ಲಿ 1538 ಗ್ರಾಮ ಪಂಚಾಯಿತಿಗಳ ವಿಸ್ತೃತ ಯೋಜನಾ ವರದಿಗಳಿಗೆ ಅನುಮೋದನೆ ನೀಡಲಾಗಿದ್ದು ಈ ಪೈಕಿ 361 ಗ್ರಾಮ ಪಂಚಾಯಿತಿಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣಾ ಘಟಕಗಳು ಕಾರ್ಯಾಚರಣೆಯಲ್ಲಿರುತ್ತವೆ. |
| (ಈ) | ಇನ್ನೂ ಎಷ್ಟು ಗ್ರಾಮಗಳಲ್ಲಿ ಘನತ್ಯಾಜ್ಯ ವಿಲೇವಾರಿ ಬಗ್ಗೆ ಕ್ರಮ ಕೈಗೊಳ್ಳಬೇಕಾಗಿದೆ; | ಪ್ರಸ್ತುತ 4464 ಗ್ರಾಮ ಪಂಚಾಯಿತಿಗಳ ಗ್ರಾಮಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆ ಮಾಡಬೇಕಾಗಿದ್ದು, ಈ ಪೈಕಿ 1156 ಗ್ರಾಮ ಪಂಚಾಯಿತಿಗಳ ವಿಸ್ತೃತ ಯೋಜನಾ ವರದಿಗಳಿಗೆ ಅನುಮೋದನೆ |

| | | |
|---|---|---|
| | | ನೀಡಲಾಗಿದ್ದು, ಬಾಕಿ ಪಂಚಾಯಿತಿಗಳಲ್ಲಿ ಶೀಘ್ರದಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆ ಮಾಡಲು ಕ್ರಮವಹಿಸಲಾಗುತ್ತಿದೆ. |
| (ಉ) | ಮುಂಬರುವ ದಿನಗಳಲ್ಲಿ ಇದೊಂದು ವಿಶೇಷ ಅಭಿಯಾನದ (Special Drive) ರೂಪದಲ್ಲಿ ಪ್ರಧಾನ ಮಂತ್ರಿ ಸ್ವಚ್ಛ ಭಾರತ ಅಭಿಯಾನದ ಅಡಿಯಲ್ಲಿ ತೆಗೆದುಕೊಂಡು ಸಾಧನೆ ಮಾಡಲು ಇರುವ ಸಮಸ್ಯೆಗಳೇನು? | ರಾಜ್ಯದಲ್ಲಿ ಸ್ವಚ್ಛ ಭಾರತ್ ಮಿಷನ್ (ಗ್ರಾ) ಯೋಜನೆಯ ಅನುಷ್ಠಾನಕ್ಕೆ ಹೆಚ್ಚಿನ ಒತ್ತು ನೀಡಲಾಗಿದ್ದು, SBM- G Phase II ಮಾರ್ಗಸೂಚಿಯಂತೆ ODF Plus ಘಟಕಾಂಶಗಳ ಅನುಷ್ಠಾನ ಮಾಡಲು ಕೆಳಕಂಡ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ.<br>1. ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಯನ್ನು ಸೂಕ್ತ ರೀತಿಯಲ್ಲಿ ನಿರ್ವಹಣೆ ಮಾಡಲು "ಕರ್ನಾಟಕ ರಾಜ್ಯ ನೈರ್ಮಲ್ಯ ಮತ್ತು ತ್ಯಾಜ್ಯ ನಿರ್ವಹಣಾ ನೀತಿ, ಕಾರ್ಯತಂತ್ರ ಮತ್ತು ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಯ ಮಾದರಿ ಉಪವಿಧಿಗಳು-2020" ಜಾರಿಗೆ ತಂದಿದ್ದು, ಅದರಂತೆ ಕ್ರಮವಹಿಸಲು ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿದೆ.<br>2. ಘನ ತ್ಯಾಜ್ಯದ ಜೊತೆಯಲ್ಲಿ ದ್ರವತ್ಯಾಜ್ಯ ನಿರ್ವಹಣೆಗೂ ಹೆಚ್ಚಿನ ಮಹತ್ವ ನೀಡಲಾಗಿದ್ದು ಮೊಟ್ಟ ಮೊದಲ ಬಾರಿಗೆ ಸುಮಾರು 4464 ಗ್ರಾಮ ಪಂಚಾಯಿತಿಗಳಲ್ಲಿ ವೈಜ್ಞಾನಿಕವಾಗಿ ದ್ರವತ್ಯಾಜ್ಯ (ಬೂದು ನೀರು) ನಿರ್ವಹಣೆ ಮಾಡಲು ಸ್ವಚ್ಛ ಭಾರತ್ ಮಿಷನ್ (ಗ್ರಾಮೀಣ) ಯೋಜನೆಯಡಿ ರೂ.821 ಕೋಟಿಗಳು ಹಾಗೂ 15ನೇ ಹಣಕಾಸು ಆಯೋಗದಡಿ ರೂ.352 ಕೋಟಿಗಳು ಒಟ್ಟಾರೆ ರೂ.1173 ಕೋಟಿಗಳಿಗೆ ಅನುಮೋದನೆ ನೀಡಲಾಗಿದ್ದು ಈ ಪೈಕಿ ಸ್ವಚ್ಛ ಭಾರತ್ ಮಿಷನ್ (ಗ್ರಾ) ಯೋಜನೆಯಡಿ ರೂ.205ಕೋಟಿಗಳನ್ನು ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗಿದೆ.<br>3. ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣಾ ಘಟಕ (MRF) ಹಾಗೂ ಮಲ ತ್ಯಾಜ್ಯ ನಿರ್ವಹಣಾ ಘಟಕಗಳನ್ನು (FSM) ಅನುಷ್ಠಾನ ಮಾಡಲು ಈಗಾಗಲೇ ಅನುಭವಿ ಮತ್ತು ಆಸಕ್ತ ಹೊರಮೂಲ ಸಂಸ್ಥೆಯ ಸಹಯೋಗದಲ್ಲಿ ವಿಸ್ತೃತ ಯೋಜನಾ ವರದಿಗಳ ಸಿದ್ಧತೆಯ ಕಾರ್ಯಗಳು ಚಾಲ್ತಿಯಲ್ಲಿದ್ದು, 4 MRF ಘಟಕ 16 FSM ಘಟಕಗಳ ವಿಸ್ತೃತ ಯೋಜನಾ ವರದಿಗಳನ್ನು ಸಿದ್ಧಪಡಿಸಲಾಗುತ್ತಿದ್ದು, ಶೀಘ್ರದಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುತ್ತಿದೆ.<br>4. ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಒತ್ತು ನೀಡುವ ಸಲುವಾಗಿ 2ನೇ ಅಕ್ಟೋಬರ್-2020 ರಂದು ಮಹಾತ್ಮ ಗಾಂಧೀಜಿಯವರ ಜನ್ಮ ದಿನಾಚರಣೆಯಂದು ಸ್ವಚ್ಛೋತ್ಸವ-ನಿತ್ಯೋತ್ಸವ (SLWM Branding) ಕಾರ್ಯಕ್ರಮಕ್ಕೆ ಚಾಲನೆ ನೀಡಿ, ಪ್ರತಿ ಜಿಲ್ಲೆಯ ಎರಡು ಗ್ರಾ.ಪಂಗಳಲ್ಲಿ ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಹಮ್ಮಿಕೊಳ್ಳಲಾಗಿದ್ದು, ಇದೇ ಮಾದರಿಯಲ್ಲಿ ಇತರೆ ಗ್ರಾ.ಪಂ.ಗಳಲ್ಲಿಯೂ ಸಹ ಆಚರಿಸಲು ಕ್ರಮವಹಿಸಲಾಗುತ್ತಿದೆ. |

| | | |
|---|---|---|
| | | 5. ಸಾಮಾಜಿಕ ಮಾಧ್ಯಮ ಹಾಗೂ ಮಾಹಿತಿ ಶಿಕ್ಷಣ ಮತ್ತು ಸಂವಹನ ಕಾರ್ಯಕ್ರಮಗಳ ಮೂಲಕ ಬಯಲು ಬಹಿರ್ದೆಸೆ ಮುಕ್ತ ಸುಸ್ಥಿರತೆ, ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆ ಹಾಗೂ ಋತುಚಕ್ರ ನಿರ್ವಹಣೆ ಮತ್ತು ವೈಯಕ್ತಿಕ ಸ್ವಚ್ಛತೆಗೆ ಸಂಬಂಧಿಸಿದಂತೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>6. ಗ್ರಾಮೀಣ ಭಾಗದ 10 ಸಮುದಾಯ ಬಾನುಲಿ ಕೇಂದ್ರಗಳ ಮೂಲಕ 9 ಜಿಲ್ಲೆಗಳಲ್ಲಿ ಬಹಿರ್ದೆಸೆ ಮುಕ್ತ ಸುಸ್ಥಿರತೆ, ಘನ ಮತ್ತು ದ್ರವತ್ಯಾಜ್ಯ ನಿರ್ವಹಣೆ, ವೈಯಕ್ತಿಕ ಸ್ವಚ್ಛತೆ ಕುರಿತು ವಿಶೇಷ ಫೋನ್-ಇನ್ ನೇರ ಪ್ರಸಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. |

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**